ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 02ನೇ ಮಾರ್ಚ್, 2020

ಕರ್ನಾಟಕ ರಾಜ್ಯದಲ್ಲಿ ನೀಟ್ ಮೂಲಕ ಹಂಚಿಕೆಯ ಬಗ್ಗೆ

ಶ್ರೀ ಐವನ್ ಡಿ'ಸೋಜಾ (ನಾಮನಿರ್ದೇಶನ ಹೊಂದಿದವರು) :-

23 (107) ಮಾನ್ಯ ಉಪ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ನೀಟ್ ಮೂಲಕ ಸೀಟ್ ಹಂಚಿಕೆಯಲ್ಲಿ ಉಂಟಾದ ಅಕ್ರಮಗಳನ್ನು ತಡೆಯಲು ಸರ್ಕಾರ ಕೈಗೊಂಡ ಕ್ರಮಗಳೇನು;

(ಆ) ರಾಜ್ಯದಲ್ಲಿ ಎಷ್ಟು ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿದೆ; ಎಷ್ಟು ಪ್ರಕರಣಗಳಲ್ಲಿ ವಿದ್ಯಾರ್ಥಿಗಳು ನ್ಯಾಯಾಲಯದ ಮುಖಾಂತರ ಸೀಟುಗಳನ್ನು ಪಡೆದುಕೊಂಡಿದ್ದಾರೆ; (ವಿವರ ನೀಡವುದು)

(ಇ) ನೀಟ್ ಮೂಲಕ ಸೀಟು ನೀಡುವ ಕಾಲೇಜುಗಳು ಮೆರಿಟ್ ವಿದ್ಯಾರ್ಥಿಗಳನ್ನು ಕ್ರಯಕ್ಕೆ ಪಡೆದು ಸೀಟ್ ಬ್ಲಾಕ್ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರಲ್ಲಿ ಶಾಮೀಲಾದ ಅಧಿಕಾರಿಗಳ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು;

(ಈ) ಮೆಡಿಕಲ್ ಕಾಲೇಜುಗಳಲ್ಲಿ ಸೀಟುಗಳನ್ನು ಹಂಚಿಕೆ ಮಾಡುವಾಗ ಸರ್ಕಾರಿ ನಿಯಮಗಳನ್ನು ಉಲ್ಲಂಘಿಸಿದ ಪ್ರಕರಣಗಳೆಷ್ಟು; ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು;

(ಉ) ನೀಟ್ ನಿಯಮ ಉಲ್ಲಂಘಿಸಿದ ಎಷ್ಟು ಮೆಡಿಕಲ್ ಕಾಲೇಜುಗಳ ವಿರುದ್ಧ ಸರ್ಕಾರ ಕ್ರಮ ಕೈಗೊಂಡಿದೆ; ಸೀಟುಗಳನ್ನು ಜಾಲತಾಣದಲ್ಲಿ ಪಡೆಯಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು)